# ಕಾನನ

OCTOBER 2011

ನಿಸರ್ಗದೆಡೆಗೆ ಪಯಣ

## ಲೇಖನಗಳು





ಅನಿಸಿಕೆಗೆ

E-mail: kaanana.mag@gmail.com

ಮುಖಪುಟ: Grass Yellow



# ಸಂಪಾದಕೀಯ

ಪ್ರಕೃತಿ ಮಡಿಲಲ್ಲಿ ಆಡುತ್ತ ಬೆಳೆಯುವ ಮಕ್ಕಳು ಬಹುಬೇಗ ಹಕ್ಕಿಪಕ್ಕಿಗಳ ಬಗ್ಗೆ ಮೋಹಗೊಳ್ಳುತ್ತಾರೆ. ಗ್ರಾಮೀಣ ಮಕ್ಕಳ ಹಕ್ಕಿಪ್ರೇಮದ ಬಗ್ಗೆ ಹಾಗೂ ಆ ಮಕ್ಕಳ ಬಾಲ್ಯದ ಆಟ ವಿನೋದದ ಬಗ್ಗೆ ಹಕ್ಕಿಲೋಕದಲ್ಲಿ ನಾಗೇಶ್ ರವರು ಈ ಬಾರಿ ***Roseringed Parakeet*** **(** *ಗಿಳಿ* )ಯ ಬಗ್ಗೆವಿವರಿಸಿದ್ದರೆ.

ವಿಶ್ವದಲ್ಲೇ ಅತೀ ಹೆಚ್ಚು ಸಂಖ್ಯೆಯಲ್ಲಿರುವ ಕೀಟಗಳಲ್ಲಿ ನಮ್ಮನ್ನು ಬಹುಬೇಗ ಸೂರೆಗೊಳ್ಳುವ ಕೀಟವೇ ಚಿಟ್ಟೆ!.

ಬಣ್ಣ ಬಣ್ಣದ ಚಿಟ್ಟೆಗಳಲ್ಲಿ ಗಂಗನು ಕಂಡ ಸಣ್ಣ ಹರಿಶಿಣ ಬಣ್ಣದ ಚಿಟ್ಟೆಯೊಂದರ, ಜೀವನದ ಬಗ್ಗೆ ಹಾಗು ಅದು ಮಾಡುವ ನಾಟಕ, ಮಾರ್ಪಾಡು, ಅದು ಹಾಕುವ ವೇಷ , ಮೊಟ್ಟೆಯಿಂದ ಚಿಟ್ಟೆಯವರೆಗೂ ಆ ಚಿಟ್ಟೆಯ ಜೀವನವನ್ನು ಚಿತ್ರ ಸಹಿತ ಶಂಕರಪ್ಪರವರ "ಗ್ರಾಸ್ ಎಲ್ಲೋ ಚಿಟ್ಟೆ ಕಥೆ"ಯಲ್ಲಿ ಚಿತ್ರಿಸಿದ್ದಾರೆ.

ಕೊನೆಯಲ್ಲಿ ಬಹಳವೇಗವಾಗಿ ಮಾಯವಾಗುತ್ತಿರುವ ಕಾಡುಗಳ ಜೊತೆಜೊತೆಯಲ್ಲೇ ತಲೆತಲಾಂತರಗಳಿಂದ ಬೆಳೆದು ಬಂದ ನಮ್ಮ ನಾಡಿನ ಜನರ ಜಾನಪದ ಕಲೆಗಳೂ ಸಹ ಮಾಯವಾಗುತ್ತಾ ಮೂಲೆಗುಂಪಾಗುತ್ತಿವೆ ಎಂಬುದರ ಬಗ್ಗೆ ಕೆ. ಎನ್ . ಅಶ್ವಥರವರ "ವರ್ಣ ವೈಭವದ ಬದುಕಿನಲ್ಲಿ ನೋಡಬಹುದು.

**ದೀಪಾವಳಿ ಹಬ್ಬದ ಶುಭಾಶಯುಗಳು.**

ಅಂತ್ಯದಲ್ಲಿ

**ಕಾನನಕ್ಕೆ ನೀವು ಬರೆಯಿರಿ** ವನ್ಯಜೀವಿ ಹಾಗು ಪರಿಸರ ಸಂರಕ್ಷಣೆ,

ವಿಜ್ಞಾನದ ಬಗ್ಗೆ ಲೇಖನಗಳನ್ನು ತಾವೂ ಕಾನನಕ್ಕೆ ಬರೆಯಬಹುದು.

**ಇ–ಮೇಲ್ ವಿಳಾಸ:**

**kaanana.mag@gmail.com**

**Wildlife Conservation Group**



# ಹಕ್ಕಿಲೋಕ

## * ಗಿಳಿ

ಇಂಗ್ಲೀಷ್ ಹೆಸರು: **Rose-ringed Parakeet**
ವೈಜ್ಞಾನಿಕ ಹೆಸರು: ***Psittacula krameri***




ಒಬ್ಬ ಕಪ್ಪನೆ ಕುಳ್ಳನೆಯ ದೇಹದ ಒಬ್ಬ ಹುಡುಗನು ತನ್ನ ಬೆನ್ನ ಹಿಂದೆ ಬ್ಯಾಗನ್ನು ಹಾಕಿಕೊಂಡು ಹೋಗುತ್ತಿರುವುದನ್ನು ಕಂಡ ನಾನು, ಇವನು ಸ್ಕೂಲಿಗೆ ಹೋಗುತ್ತಿರಬಹುದೆಂಬ ಊಹೆಯು ಸರಿಯಾಗಿತ್ತು. ಅವ್ನು ಸೊಳ್ಳೆಪುರದಿಂದ ಶಿವನಹಳ್ಳಿ ಶಾಲೆಗೆ ಹೊಸದಾಗಿ ಸೇರಿಕೊಂಡಿದ್ದ. ಸೊಳ್ಳೆಪುರದಲ್ಲಿ ಸುಮಾರು ಐವತ್ತು ಮನೆಗಳಿದ್ದರೂ ಅವರು ತಮ್ಮ ಮಕ್ಕಳನ್ನು ಯಾರು ಸಹ ಶಾಲೆಗೆ ಸೇರಿಸುವ ತಂಟೆಗೆ ಹೋಗುತ್ತಿರಲಿಲ್ಲ, ಅವರು ನೀಡುತ್ತಿದ್ದ ವಿದ್ಯೆಯೇ ಬೇರೆ! ಇಲಿ ಹಿಡಿಯುವುದು, ಮಂಕರಿ ಎಣೆಯುವುದು, ಬೇಟೆಯಾಡುವುದು, ಇತ್ಯಾದಿ. ಅಂತಹುದರಲ್ಲಿ ಇವನನ್ನು ನೋಡಿ ನನಗೆ ಒಬ್ಬ ಜೊತೆಗಾರ ಸಿಕ್ಕ ಎಂಬ ಖುಷಿಯಾಯಿತು. ನಾನು ಅವನನ್ನು ಅಲ್ಲೇ ಇರಲು ಹೇಳಿ ಮನೆಗೆ ಹೋಗಿ ಬ್ಯಾಗ್ ತಗುಲಾಕಿಕೊಂಡು ಅವನ ಜೊತೆ ಶಾಲೆಗೆ ಹೊರಟೆ.

‘ಲೇ ಹುಡ್ಗ ಎಷ್ಟನೆ ಕ್ಲಾಸೋ ನೀನು?’

ಎಂದು ಅವನನ್ನು ಪರಿಚಯ ಮಾಡಿಕೊಳ್ಳಲು ಮುಂದಾದೆ ‘ನಾಲ್ಕು’ ಎಂದು ಉತ್ತರಿಸಿದ.

‘ಸರಿ ಏನ್ ನಿನ್ ಹೆಸರು?’

‘ಯಾವ್ ಸ್ಕೂಲಲ್ಲಿ ಓದಿದೇ ಇಷ್ಟ್ ದಿನಾ?’ ಎಂದೆ.

ಅವನು ತನ್ನ ಹೆಸರು ಮಾದೇವನೆಂದು, ಅವನು ತನ್ನ ಅಜ್ಜಿಯ ಮನೆಯಲ್ಲಿ ಇಷ್ಟು ದಿನ ಇದ್ದು, ಅಲ್ಲೇ ಮೂರನೇ ತರಗತಿಗೆ ಸೇರಿದ್ದೆನೆಂದು ತನ್ನ ವೃತ್ತಾಂತವನ್ನು ಬಿಚ್ಚಿಟ್ಟ. ನಾನು ಅವನಿಗೆ ನನ್ನ ಪರಿಚಯ ಮಾಡಿಕೊಂಡು ಇನ್ನು ಮೇಲೆ ಇಬ್ಬರೂ ಜೊತೆಯೇ ಹೋಗಿ ಬರೋಣವೆಂದು ಮಾತಾಡಿಕೊಂಡು ಶಾಲೆಗೆ ಬಂದು ಸೇರಿದೆವು. ಅಂದಿನಿಂದ ಶಾಲೆಗೆ ಇಬ್ಬರೂ ಜೊತೆಯಲ್ಲಿಯೇ ಬಂದು ಹೋಗುತ್ತಿದ್ದೆವು.

ಹಳ್ಳಿಯ ಶಾಲೆಯಲ್ಲಿನ ಹುಡುಗರ ಆಟಗಳು ಕಾಲ ಕಾಲಕ್ಕೆ ತಕ್ಕಂತೆ ಬದಲಾಗುತ್ತಿರುತ್ತವೆ, ಬೇಸಿಗೆಯಲ್ಲಿ ಗೋಲಿ ಆಡಿದರೆ, ಮಳೆಗಾಲದಲ್ಲಿ ಕುಂಟೇಬಿಲ್ಲೆ, ಬುಗುರಿ, ಗಿಲ್ಲಿದಾಂಡು ಮುಂತಾದವುಗಳನ್ನು ಆಡುತ್ತಿರುತ್ತಾರೆ.

ಮಳೆಗಾಲ ಬಂದಿದ್ದರಿಂದ ಶಾಲೆಯ ಎಲ್ಲಾ ಮಕ್ಕಳ ಕೈಲಿ ಒಂದೊಂದು ಬುಗುರಿ ಇರುತ್ತಿತು. ಕೆಲವು ಹುಡುಗರವು ತಾವೇ ಸ್ವತಃ ಮಾಡಿದ್ದ ಬಣ್ಣವಿಲ್ಲದ ಬುಗುರಿಗಳಾದರೆ, ಇನ್ನೋ ಕೆಲವರವು ಅಪ್ಪ ಮಾಡಿಕೊಟ್ಟಿದ್ದ ಗುಂಡನೆಯ ಬುಗುರಿಗಳು, ಕೆಲವರದ್ದು ಅಂಗಡಿಯ ಬಣ್ಣದ ಬುಗುರಿಗಳು, ಶಾಲೆಯ ಮೈದಾನದಲ್ಲಿ ರಾರಾಜಿಸುತ್ತಿದ್ದವು. ನಾನೂ ಅವುಗಳನ್ನು ನೋಡಿ ಅಂಗಡಿಯಲ್ಲಿ ಒಂದು ಬಣ್ಣದ ಬುಗುರಿ ಕೊಂಡುಕೊಂದಿದ್ದೆ. ಮಾದೇವನು ಅವನೇ ಒಂದು ವಿಚಿತ್ರ ಆಕಾರದ ಬುಗುರಿ ಮಾಡಿಕೊಂಡಿದ್ದ. ನಮಗಿಬ್ಬರಿಗೂ ಆಡಲು ಅಷ್ಟು ಗೊತ್ತಿಲ್ಲದಿದ್ದುದರಿಂದ ಬೇರೆಯಾವರ ಜೊತೆ ಆಡಲು ಹೋದರೆ ಬುಗುರಿ ಸೀಳಾಗಬಹುದೆಂದು ಹೆದರಿ ಇಬ್ಬರೇ ಆಡುತ್ತಿದ್ದೆವು.

ಒಮ್ಮೆ ದಾರಿಯಲ್ಲಿ ಮನೆಗೆ ಹೋಗುತ್ತಿರಬೇಕಾದರೆ ಮಾದೇವನು

‘ಅಲ್ಲಾ ನಿನ್ ಬುಗುರಿ ಇಷ್ಟು ಚೆನ್ನಾಗದಲ್ಲಾ ಎಷ್ಟ್ರುಪಾಯಿ ಕೊಟ್ಟೆ’ ಎಂದ

‘ಹತ್ರುಪಾಯಿ’ ಎಂದೆ




‘ಸರಿ ಐದ್ರುಪಾಯಿ ಕೊಡ್ತೀನಿ ಕೊಡುತ್ತೀಯಾ?’

‘ ಹ ಹ ಹ ಹ . . ಯಾಕೊ ಬಂದ್‌ಬುಡು ಅಂಗಂತ’ ಎಂಬ ನನ್ನ ಉತ್ತರಕ್ಕೆ ತೆಪ್ಪಗಾದ.

ನಾನು ಸೊಳ್ಳೆಪುರದವರು ಹಕ್ಕಿಹಿಡಿಯುವುದನ್ನು, ಇಲಿ ಹಿಡಿಯುವುದನ್ನು, ಶಾಲೆಗೆ ಬರುವಾಗ ಸಿಗುವ ಗದ್ದೆಗಳಲ್ಲಿ ಕಂಡಿದ್ದೆ, ಒಮ್ಮೆ ಮಾದೇವನನ್ನು ಯಾವುದಾದರು ಹಕ್ಕಿ ಸಿಕ್ಕರೆ ಹಿಡಿದುಕೊಂಡು ಕೊಡುಯೆಂತಲೂ ಹೇಳಿದ್ದೆ. ಅವನು ನಮ್ಮ ಹೊಲದಲ್ಲಿರುವ ತುರುಬೇವಿನ ಮರದಲ್ಲಿ ಗಿಳಿಗಳು ಮರಿಮಾಡಿಸುತ್ತವೆಯೆಂದು, ನಾನು ಎರಡನ್ನು ಸಾಕಿದ್ದೇನೆಂದು, ಸಿಕ್ಕಾಗ ಕೊಡೆವೆನೆಂದು ಹೇಳಿದ್ದ. ಆದರೆ ಅವನು ಹಿಡಿದುಕೊಂಡು ಬರಲೇ ಇಲ್ಲ.

ನನಗೆ ಈ ಬುಗುರಿಗಿಂತ ಹೆಚ್ಚು ಹಕ್ಕಿಯು ಮೇಲೆಯೇ ಆಸೆ ಇತ್ತು, ಮಾದೇವನು ನನ್ನ ಬುಗುರಿಯನ್ನು ತೆಗೆದುಕೊಳ್ಳಲು ಮಾಡುತ್ತಿದ್ದ ಪ್ರಯತ್ನಗಳನ್ನು ಕಂಡು ನನಗೆ ಇವನ ಬಳಿ ಹಕ್ಕಿ ಕೇಳಲು ಇದೇ ಒಳ್ಳೆಯ ಸಮಯವೆಂದು ಯೋಚಿಸಿ,

‘ಲೋ ನಾಳೆ ಸ್ಕೂಲಿಗೆ ಬರ್‌ಬೇಕಾದ್ರೆ ಹಕ್ಕಿ ಇಡ್ಕೋಬಾ’ ಎಂದು ಹೇಳಿದೆ.

ಮಾದೇವನು ಬುಗುರಿಯ ಆಸೆಯಿಂದ ಹಿಡಿದುಕೊಡಲು ಸಂತೋಷದಿಂದ ಒಪ್ಪಿಕೊಂಡ.

ಇದಾದ ಮಾರನೆಯ ದಿನವೇ ಸ್ಕೂಲಿಗೆ ಬರಬೇಕಾದರೆ ಗಿಳಿಯನ್ನು ಹಿಡಿದುಕೊಂಡು ಬಂದ. ನಾನು ಖುಷಿಯಲ್ಲಿ ಅದನ್ನು ಹಿಡಿದುಕೊಂಡು ಮನೆಯಲ್ಲಿ ಕೋಳಿ ಸಾಕಲು ಮಾಡಿದ್ದ ದೊಡ್ಡದಾದ ಮಕ್ರಿಯಲ್ಲಿ ಬಿಟ್ಟು ಗಿಳಿಗೆ ತಿನ್ನಲು ಟಮೋಟೊ ಹಣ್ಣನ್ನು ಹಾಕಿ ಸ್ಕೂಲಿನ ಕಡೆಗೆ ಹೋಗಲು ಬ್ಯಾಗ್ ಹಾಕಿಕೊಂಡಿದ್ದನ್ನು ಕಂಡ ನನ್ನ ಅಮ್ಮನು

‘ಲೇ ಆ ಗಿಳೀನ ಅಂಗೆ ಹಿಡ್ಕೋ ಹೊಗ್ರೊ,

ಇಲ್ಲಾಕೆ ಬಿಟ್ಟಿದ್ದೀರ ‘ ಎಂದು ಗದರಿದರು.

‘ಇಲ್ಲೇ ಇರ್ಲಿ ಸಾಂಯ್ಕಾಲ ಬರ್ತೀವಿ’ ಎಂದು ಹೇಳಿ ಶಾಲೆಯ ಕಡೆ ಹೊರಟೆವು.

ನಾನು ಮನೆಯಿಂದ ಆಚೆ ಬಂದ ಕ್ಷಣವೇ ಮಾದೇವನು ಬುಗುರಿಯನ್ನು ನನ್ನಿಂದ ಕೇಳಿ ಪಡೆದುಕೊಂಡ. ನನಗೆ ಗಿಳಿ ಸಿಕ್ಕ ಖುಷಿಯಲ್ಲಿ ಮಾತಿನಂತೆ ಬುಗುರಿಯನ್ನು ಅವನಿಗೆ ಕೊಟ್ಟೆ.

ಹಕ್ಕಿಗಳ ಬಗ್ಗೆ ಏನೂ ಗೊತ್ತಿಲ್ಲದ ನಾನು ಅವನ ಬಳಿ ಅದಕ್ಕೆ ತಿನ್ನಲು ಏನು ಹಾಕಬೇಕೆಂದು ಕೇಳಿ ತಿಳಿದೆ. ಶಾಲೆಗೆ ಬಂದ ಮೇಲೆಯೂ ನನ್ನ ಮನಸ್ಸೆಲ್ಲಾ ಗಿಳಿಯ ಕಡೆಯೇ ಇತ್ತು. ಶಾಲೆ ಬಿಡುವುದನ್ನು ಕಾಯುತ್ತಿದ್ದ ನಾವು ಬಿಟ್ಟಿದ್ದೆ ತಡ ದೌಡು. ಮನೆಗೆ ಹೋಗಿ ಬ್ಯಾಗ್ ಬಿಸಾಕಿ ಗಿಳಿಯ ಬಳಿ ಹೊರಟೆ, ಮಾದೇವನು ಮನೆಗೆ ಬರದೆ ಅವರ ಊರಿನ ದಾರಿ ಹಿಡಿದದ್ದನ್ನು ನಾನು ಲೆಕ್ಕಿಸಲೇ ಇಲ್ಲ, ಗಿಳಿಯನ್ನು ನೋಡುತ್ತಾ ಕುಳಿತೆ. ನೋಡುತ್ತಿರಬೇಕಾದರೆ ಅದು ಸ್ವಲ್ಪ ಕುಂಟುತ್ತಿತ್ತು ಅದರ ಒಂದು ಕಾಲು ಮುರಿದಿತ್ತು, ಇದು ಸ್ವಲ್ಪ ದಿನದಲ್ಲಿ ಸರಿಯಾಗಬಹುದೆಂದು ಭಾವಿಸಿ ಮಾದೇವ ನೀಡಿದ ಸಲಹೆಯಂತೆ ಅದಕ್ಕೆ ಹಣ್ಣುಗಳನ್ನು ಊಟವಾಗಿ ಕೊಡುತ್ತಿದ್ದೆ, ಆದರೆ ಅದು ಹಣ್ಣುಗಳನ್ನು ಮೂಸಿಯೂ ಸಹ ನೋಡದಿದ್ದುದನ್ನು ಕಂಡು ನನಗೆ ಭಯವೇ ಆಯಿತು ನಾನು ನಮ್ಮಮ್ಮನನ್ನು ಕೇಳಿದಾಗ ಅವರು

‘ನೀನು ಇದನ್ನು ಸಾಕುವುದಾದರೆ ನಾನೇ ಇದನ್ನು ಎತ್ತಿ ಬಿಸಾಡುತ್ತೇನೆ ಮನೆಯಲ್ಲಿ ಗಿಳಿ ಸಾಯಬಾರದು ಅದನ್ನ ನಾಳೆ ಅವನಿಗೆ ಕೊಟ್ಬಿಡು’ ಎಂದು ಬೈದರು.

ನಾನು ಇವರನ್ನು ಕೇಳಿದ್ಯಾಕೆ ಎಂದು ಪರಿತಪಿಸುತ್ತಾ ಮಾದೇವನನ್ನೇ ನಾಳೆ ಕೇಳಬಹುದೆಂದು ಸುಮ್ಮನಾದೆ. ಬೆಳಗ್ಗೆ ಎದ್ದು ನಾನು ಮಾದೇವ ಬರುವ ದಾರಿಯನ್ನೇ ಕಾದು ಕುಳಿತೆ ಅವನು ಬಂದಾಕ್ಷಣವೇ ಗಿಳಿಯ ಬಗ್ಗೆ ಎಲ್ಲವನ್ನೂ ಹೇಳಿ, ಮಾದೇವನನ್ನು ಮನೆಗೆ ಕರೆದುಕೊಂಡು ಬಂದೆ ಗಿಳಿಯನ್ನು ಗಮನಿಸಿದ ಮಾದೇವನು ಹೊಸಜಾಗವಾದ್ದರಿಂದ ಇದು ಸಪ್ಪಗಿದೆಯೆಂದು ಇನ್ನೆರಡು ದಿನಗಳಲ್ಲಿ ಸರಿಯಾಗುತ್ತದೆಂದು ಹೇಳಿ ಶಾಲೆಗೆ ಹೊರಡಲು ಎದ್ದು ನಿಂತ. ನಾನು ಅವನ ಮಾತನ್ನು ನಂಬಿ ಅವನ ಜೊತೆ ಹೊರಟೆ, ಆದರೆ ನನ್ನ ನಂಬಿಕೆ ಸಾಯಂಕಾಲ ಬಂದು ನೋಡುವಷ್ಟರಲ್ಲಿಯೇ ಸುಳ್ಳಾಗಿ ಬಿಟ್ಟಿತ್ತು. ಬಂದು ನೋಡುತ್ತೇನೆ, ನನ್ನ ಮುದ್ದಿನ ಗಿಳಿ ಸ್ಥಿರವಾಗಿ ಮಲಗಿತ್ತು!

ಗಿಳಿಗಳಿಗೆ ಪ್ರಾಚೀನ ಕಾಲದ ಮನೆತನಗಳು ಮತ್ತು ಶಾಸ್ತ್ರ ಹೇಳುವವರು ವಿಶೇಷವಾದ ಸ್ಥಾನ ಕಲ್ಪಿಸಿಕೊಟ್ಟಿದ್ದಾರೆ. ಆದ್ದರಿಂದ ಸಾಮಾನ್ಯವಾಗಿ ಗಿಳಿಗಳನ್ನು ಎಲ್ಲರೂ ನೋಡಿರುತ್ತಾರೆ ಆದರೆ ಅವುಗಳನ್ನು observe ಮಾಡಿರುವವರು ತುಂಬಾ ಕಡಿಮೆ. ಗಿಳಿಗಳಲ್ಲಿ ಮೂರ್ನಾಲ್ಕು ಪ್ರಭೇದಗಳಿದ್ದು ಇವುಗಳಲ್ಲಿ ರೋಸ್-ರಿಂಗ್ಡ್ ಪ್ಯಾರಕೀಟ್ ಸಹ ಒಂದು. ಈ ಗಿಳಿಗಳು ಗೊರವಂಕ ಗಾತ್ರದ ಉದ್ದ ಬಾಲದ ಹಸಿರು ಹಕ್ಕಿ ಇದರ ಕೆಂಪು ಬಣ್ಣದ ಮೊನಚಾದ ಕೊಕ್ಕು ಹಣ್ಣುಗಳನ್ನು ತಿನ್ನುವ ಸಹಾಯಕ್ಕೆ ಹೇಳಿಮಾಡಿಸಿದಂತಿದೆ. ಇವುಗಳ ಕತ್ತಿನ ಸುತ್ತ ಕೆಂಪು ಗುಲಾಬಿ ಬಣ್ಣದ ಪಟ್ಟಿ ಇರುವುದರಿಂದ ಇದರ ಹೆಸರಿಗೆ ರೋಸ್-ರಿಂಗ್ಡ್ ಎಂಬ ಪ್ರಿಫಿಕ್ಸ್ ಅನ್ನು ಸೇರಿಸಲಾಗಿದೆ. ಗಿಳಿಗಳು ಮರದ ಕಾಂಡವನ್ನು ಕೊರದು ಗೂಡು ಮಾಡಿ ನಾಲ್ಕರಿಂದ ಆರು ಮೊಟ್ಟೆಗಳನಿಟ್ಟು ಇಪ್ಪತ್ತೆರಡು ದಿನಗಳ ತನಕ ಕಾವು ನೀಡಿ ಮರಿ ಮಾಡಿಸುತ್ತವೆ.




## *"You are a rascal. Do you know that"*

## ಗ್ರಾಸ್‌ಯೆಲ್ಲೋ ಚಿಟ್ಟೆ ಕತೆ.

ಮಂಚಿನೀಕೋಟೆಯ ಪೆದ್ದವೆಂಕಟರಮಣಪ್ಪನ ಮೊಮ್ಮಗನೂ, ಸೀರಾಮಪ್ಪನ ಮಗನೂ ಆದ ಗಂಗರಾಜನು. ನಮ್ಮ ಮನೆಯ ಮುಂದೆಯೇ ದಿನಕ್ಕೆ ಮೂರ್ನಾಲ್ಕು ಬಾರಿ, ಹಾಲು ತರಲು, ನೀರುತರಲು ತಿರುಗಾಡುತ್ತಾ, ಹಾಡುತ್ತಾ, ಕುಣಿಯುತ್ತಾ ಲಾಗಹಾಕಿ ಸಾಗುವಾಗ, ಅವನನ್ನು ಗಂಗನೆನ್ನಬೇಕೋ ಇಲ್ಲ ಬಾಲವಿಲ್ಲದ ಮಂಗನೆನ್ನಬೇಕೋ ಎಂಬ ಪರಿಕಲ್ಪನೆಯಲ್ಲಿ ಗೊಂದಲಗಳಿವೆ.

ಗಂಗನು ನಿಬಿಡ ಕಾಡಿನ ಮಧ್ಯೇ ಒಂಟಿ ಮನೆಯಲ್ಲಿ ವಾಸವಿದ್ದು. ಆ ಕಾಡಲ್ಲಿ ಆಟವಾಡಲು ಜೊತೆಗೆ ಗೆಳೆಯರಿಲ್ಲದೆ ಬೆಳೆಯುತ್ತಿರುವ ಇವನಿಗೆ, ಪುಳ ಪುಳ ಓಡುವ ಅಳಿಲುಗಳು, ಮೊಟ್ಟೆಯೊಡೆದು ಹೊರಬಂದು ಬಾಯಿಕಳೆಯುವ ಸೂರಕ್ಕಿಯ ಮರಿಗಳು, ಹಾರಾಡುವ ಬಣ್ಣಬಣ್ಣದ ಚಿಟ್ಟೆಗಳೇ ಮೊದಲಾದ ಸಕಲ ಫ್ಲೋರಾ ಫಾನಗಳೇ ಇವನ ಸ್ನೇಹಿತರು!.

ಅಂದು ಬೆಳಿಗ್ಗೆ ಮಸಲ್ಕನೇ ಎದ್ದು ನಾನು, ನಮ್ಮ ಮನೆಯ ಪಕ್ಕದಲ್ಲೇ ಇರುವ ಕಾಡು ದಾರಿಯಲ್ಲಿ ನೆಲಮಟ್ಟದಿಂದ ಮೂರ್ನಾಲ್ಕು ಅಡಿ ಎತ್ತರದ ಪೊದೆಯಲ್ಲಿ ಹುಲ್ಲಿನಿಂದ ಪುಟ್‌ಬಾಲ್ ರೀತಿ ಕಟ್ಟಿದ್ದ ಕೆಂಬೂತದ ಗೂಡಿನ ಬಳಿ ಹೈಡಾಕಿ ಪೋಟೊ ತೆಗೆಯಲು ಹೈಡಿನಲ್ಲಿ ಹಕ್ಕಿಗಾಗಿ ಅಡಗಿ ಕಾದು ಕುಳಿತಿದ್ದೆ.

ನಾನು ಹೈಡಿನಲ್ಲಿ ಅಡಗಿ ಕುಳಿತಿರುವುದು ತಿಳಿಯದ ಗಂಗನು ಕೈಯಲ್ಲಿ ಹಾಲಿನ ಡಬ್ಬವನ್ನು ಹಿಡಿದು, ಅದರಿಂದಲೇ ತಮಟೆ ಬಾರಿಸುತ್ತಾ, ಶಾಲೆಯಲ್ಲಿ ಕಲಿಯುತ್ತಿದ್ದ ಇಂಗ್ಲಿಷ್ ನಾಟಕದ ಒಂದು ತುಂಡನ್ನು ***"you are a rascal. Do you know that" ಯೂ ಆರ್ ಏ ರಾಸ್ಕಲ್. ಡು ಯೂ ನೋ ದಟ್!"*** ಎಂದು ಕಂಠಪಾಠ ಹೇಳಿಕೊಳ್ಳುತ್ತಾ ಸಾಗಿ ಬಂದ.

ಆ ಗಂಗನಾ ತಮಟೆ ವಾದ್ಯಕ್ಕೂ ಹಾಗು ಗಾನವನ್ನು ಕೇಳಲಾಗದೆ ಬಹಳ ಸೂಕ್ಷ್ಮಮತಿ ಪಕ್ಷಿಯಾದ ಕೆಂಬೂತವೂ ಅವನಿನ್ನೂ ದೂರವಿರುವಾಗಲೇ ಹಾರಿ ಹೋಯಿತು. ಆಳೆತ್ತರದ ಬಳಂಜಿ ಗಿಡದ ಹತ್ತಿರ ಬಂದವನೆ ಗಕ್ಕನೆ ನಿಂತು, ಗಿಡದ ಕಡೆ ತಿರುಗಿ " ಗುಡ್ ಮಾರ್ಣಿಂಗ್ ಬಾಗುನ್ನಾವಾ" ಎನ್ನುವುದೇ!. ಅಲ್ಲೇ ಹೈಡಿನಲ್ಲಿದ್ದ ನಾನು, ಇವನು ನನಗೇ ಗುಡ್ಮಾರ್ನಿಂಗ್ ಹೇಳಿದ್ದು ಎಂದು ಕೊಂಡು, "ಏಮ್ರಾ ಗಂಗಾ? ಗುಡ್ ಮಾರ್ಣಿಂಗ್" ಎನ್ನುತ್ತಾ ಹೈಡಿನಿಂದ ಆಚೆ ಬಂದೆ.

“ಥೋ! ನೀನ್ ಇಲ್ಲೇ ಇದ್ದಿಯಾ ಅಣಾ,” ಎಂದು ಅಚ್ಚರಿಗೊಂಡು “ಗುಡ್ಡ್ ಪೆಟ್ಟಾವುಂದಿ ರಾ..ನಾ ಇಲ್ಲಿ” ಎಂದು ಬಳಂಜಿ ಗಿಡದ ಎಲೆಯ ಕಡೆ ಕೈಮಾಡಿ ತೋರಿಸಿದ. ನಾನು ಯಾವುದೋ ಹಕ್ಕಿ ಗೂಡು ಮಾಡಿರಬೇಕು ಎಂದು ನೋಡಿದರೆ ಅಲ್ಲಿ ಗೂಡಿಲ್ಲಾ!. ‘ಎಲ್ಲೋ ಗಂಗಾ ಗೂಡೇ ಇಲ್ಲ ಗುಡ್ಡಾ ಅಂತಿಯಾ’ ಎಂದೆ.



‘ಅದಲ್ಲಾ ಅಣ್ಣೋ, ಹರ್ಷಣೂ ಚಿಟ್ಟೆ ಇವಾಗ್ ತಾನೇ ಬಂದು ಗುಡ್ಡ ಇಕ್ಕಿತು ಸೂಡು ಮಡೆ, ಎಂದು ತೆಲಗು ಮಿಶ್ರಿತ ಕನ್ನಡದಲ್ಲಿ ಹೇಳುತ್ತಾ, ಬಳಂಜಿ ಗಿಡದ ಚಿಗುರೆಲೆ ಕೆಳಗೆ ಇಟ್ಟಿದ್ದ ಸಣ್ಣ ಸಣ್ಣ ಮೊಟ್ಟೆಗಳ ಗುಂಪನ್ನು ತೋರಿಸಿ, ನನಗೆ ಹಾಲು ತರಲು ಟೈಮಾತದೆ, ಲೇಟಾಗೋದ್ರೇ ಆ ಪಾಲು ರೇಣ್ಕಮ್ಮಾ ತಿಟ್ತಾರೂ. ಎಂದು ಬಿರಬಿರನೆ ಹೊರಟನಾ ಒಂದು ಕೆಂಪು ಟವಲ್ಲನ್ನು ಕೋಲಾಟ ಕುಣಿಯುವವರಂತೆ ಅವನ ನಡಕ್ಕೆ ಬಿಗಿಯಾಗಿ ಬಿಗಿದು , ಅದರ ಕುಚ್ಚು ಬಲಕ್ಕೆ ಬರುವಂತೆ .

ನಾನು ಕೆಲವು ಬಣ್ಣ ಬಣ್ಣದ ಚಿಟ್ಟೆಗಳನ್ನು ನೋಡಿ ಸುಖಿಸಿದ್ದೆನೇ ವಿನಹ ಅದರ ಮೊಟ್ಟೆ ನೋಡಿರಲೇ ಇಲ್ಲಾ.

ಒಮ್ಮೆ ಮಾತ್ರ ಮನೆಯ ಹಿಂದೆ ಇದ್ದ ಕೆಂಪುದಾಸವಾಳ ಗಿಡದ ಬಳಿ ಒಂದು ಅಂಗೈ ಅಗಲದ ನೀಲಿ ಚಿಟ್ಟೆಯನ್ನು ನೋಡಿ ಕ್ಯಾಮರ ತಕ್ಕೊಂಡು ಅದರಿಂದೆ ಓಡಿ ಓಡಿ ಸುಸ್ತಾಗಿದ್ದೆ. ಅದು ಮರದಿಂದ ಮರಕ್ಕೆ ಹೂವಿನಿಂದ ಹೂವಿಗೆ ಸುಯ್ ಸುಯ್ ಎಂದು ಹಾರುತ್ತಾ, ಕುಳಿತಲ್ಲಿ ಕೂರದೆ ಫೋಟೊಗೆ ಒಂದೇ ಒಂದು ಪೋಸ್ ಕೊಡದೆ ಹಾರಿ ಹೋಗಿದ್ದರಿಂದಲೂ, ಓಡಿ ಓಡಿ ಸುಸ್ತಾಗಿದ್ದರಿಂದಲೂ ಹಾಳಾಗಿ ಹೋಗ್ಲಿ ಈ ತಿಕ್ಕಲು ಚಿಟ್ಟೆಗಳು ಫೋಟೊಗೆ ಸಿಗಲ್ಲಾ, ಎಂದುಕೊಂಡು ಸುಮ್ಮನಾಗಿ ಹೋಗಿದ್ದೆ.

ಇದಾದ ಮೂರ್ನಾಲ್ಕು ದಿನದ ಮೇಲೆ ದಾರಿಯಲ್ಲಿ ಕಂಡ ಬೋಳು ಗಿಡವನ್ನು ಕಂಡು, ಇದರ ಎಲೆಗಳನ್ನೆಲ್ಲಾ ಬೋಳಿಸಿದ ಬೋಳ ಯಾರು ಎಂದುಕೊಂಡು ಹತ್ತಿರ ಹೋಗಿ ನೋಡಿ, ಬಾಯಿಯ ಮೇಲೆ ಬೆರಳಿಟ್ಟುಕೊಂಡೆ. ಗಂಗನು ತೋರಿಸಿದ ಚಿಟ್ಟೆ ಮೊಟ್ಟೆಗಳನ್ನು ಜ್ಞಾಪಿಸಿಕೊಂಡೆ.

ಮೊಟ್ಟೆಯೊಡೆದು ಹೊರಬಂದ ಅಂಚಿಕಡ್ಡಿ ಗಾತ್ರದ ಮರಿ ಹುಳಗಳು ಕೊಂಬೆ ಕೊಂಬೆಗೂ ಜೋತು ಬಿದ್ದು ಎಲೆ ತಿನ್ನುವ ಮಷಿನ್‌ಗಳಂತೆ ಒಂದೇ ಒಂದು ಚಿಗುರಿನ ಕುಡಿಯನ್ನೂ ಬಿಡದೆ ಬೋಳಿಸಿದ್ದವು.



ಸಣ್ಣ ಸಣ್ಣ ಮೊಟ್ಟೆಗಳನ್ನು ಎಲೆಗೆ ಅಂಟಿಸಿ ಟಾಟಾ ಹೇಳಿದ್ದಾ ಅವುಗಳ ಅಮ್ಮಚಿಟ್ಟೆ ಸತ್ತು ದಿನಗಳೇ ಕಳೆದಿದ್ದವೆನೋ. ಬದುಕಿನ ಸಕಲ ಜವಾಬ್ಧಾರಿಯನ್ನು ಹುಟ್ಟಿನಿಂದಲೇ ಹೊತ್ತ ಈ ಲಾರ್ವಗಳು ನಿರಾಯುದಿಗಳು. ಹಾರಲು ರೆಕ್ಕೆಯಿಲ್ಲಾ, ಶತೃಗಳಿಂದ ತಪ್ಪಿಸಿಕೊಂಡು ಓಡಲು ಸಮರ್ಥವಾದ ಕಾಲುಗಳು ಕೂಡ ಇಲ್ಲದಿದ್ದರೂ ಎಲೆಯ ಕೆಳಗೆ ಸೇಪಾಗಿ ಅಡಗಿ ಕುಳಿತು ತಿನ್ನುವುದಕ್ಕೊಸ್ಕರ ಹುಟ್ಟಿರುವ ಈ ಮರಿಹುಳಗಳ ಬಾಯಿಗೆ ಚರ್ಮದ ಚೀಲವನ್ನು ತಗಲಿಕ್ಕಿದಂತೆ ಮತ್ತು ಆ ಚೀಲಕ್ಕೆ ಬ್ರಮ್ಮಾಂಡ ಹಸಿವಾಗಿರುವಂತೆ ಎಲೆ ಎಲೆಯ ಕೆಳಗೆ ನೂರಾರು ಮರಿಹುಳಗಳು ಗುಂಪಾಗಿ ಕುಳಿತು, ಹಾರಾಡುವ ಹಕ್ಕಿಗಳಿಂದ ಕಣ್ಣು ತಪ್ಪಿಸಿಕೊಂಡು, ಕಣ್ಣುಮುಚ್ಚಿ ಮೆಲ್ಲಗೆ ಡೇ ಅಂಡ್ ನೈಟ್ ಬಿಡುವಿಲ್ಲದೇ ತಿನ್ನುತ್ತಿದ್ದವು.



ಪಾಪ ಆ ಅಸಹಾಯಕ ಗಿಡವಾದರೂ ಏನು ಮಾಡೀತೂ, ಅದಕ್ಕೋ ಕೈಯಿಲ್ಲಾ, ಕಾಲಿಲ್ಲಾ ಬಾಯಿಲ್ಲ!!. ರೆಂಬೆ ರೆಂಬೆಯಲ್ಲಿ ಇದ್ದಬದ್ದ ಎಲೆಗಳನ್ನೆಲ್ಲಾ ತಿಂದು ಮುಗಿಸಿದ ಮೇಲೆ, ಎರಡು ಅಂಚಿಕಡ್ಡಿ ಗಾತ್ರಕ್ಕೆ ಬೆಳೆದ ಹುಳಗಳು, ಆ ಬೋಳು ರೊಂಬೆಯಲ್ಲೇ “ ಸ್ಕ್ವಾಟ್‌ನಲ್ಲಿ ಖಧಾಂಥಾಲ್ ಮಾಡುವಾಗ ಸಾಲಾಗಿ ನಿಂತಂತೆ ಬಹಳ ಶಿಸ್ತಿನಿಂದ ಎರೆಡೆರಡು ಇಂಚು ಡಿಸ್ಟೇನ್ಸ್ ತಕ್ಕೊಂಡು ರೆಂಬೆಯ ಮೇಲೆ ಅಡ್ಡಲಾಗಿ ಮಲಗಿದ್ದವು.

ಮಾರನೇ ಬೆಳಿಗ್ಗೆ ಕಾಫಿ ಕುಡಿಯಿತ್ತಾ ವರಾಂಡದಲ್ಲಿ ಕುಳಿತಿದ್ದ ನನಗೆ, ನೆನ್ನೆ ತಾನೇ ಬೋಳಾಗಿದ್ದ ಬಳಂಜಿ ಗಿಡ ರಾತ್ರೋ ರಾತ್ರಿ ಚಿಗುರೊಡೆದಿರುವುದನ್ನು ಕಂಡು ವಿಸ್ಮಯಗೊಂಡೆ. ಕೆಲವು ಜಾತಿಯ ಬಿದಿರು ದಿನಕ್ಕೆ ಎರಡು ಅಡಿ ಉದ್ದ ಬೆಳೆಯುತ್ತದೆ ಎಂದು ಕೇಳಿದ್ದೆನಾದ್ದರಿಂದ ಈ ಬೋಳುಗಿಡ ಒಂದು ರಾತ್ರಿಗೆ ಚಿಗುರು ಬಿಟ್ಟಿರುವುದರಲ್ಲಿ ಏನು ಮಹಾ ಎಂದು, ಹತ್ತಿರ ಹೋಗಿ ಕಡು ಹೊಂಬಣ್ಣದಿಂದ ಹೊಳೆಯುತ್ತಿದ್ದ ಚಿಗುರೆಲೆಯ ಕುಡಿಗಳನ್ನು ಕಂಡು ಖುಷಿಗೊಂಡೆ. ಈ ಚಿಗುರನ್ನು ತಿಂದು ಮುಗಿಸುತ್ತವೆ ಆ ಬಕಾಸುರ ಲಾರ್ವಗಳು ಎಂದುಕೊಂಡು ಅವಕ್ಕಾಗಿ ಹುಡುಕಿದರೆ ಅಲ್ಲಿ ಒಂದೇ ಒಂದು ಹುಳವು ಇಲ್ಲಾ! ಮಾಯಾ!.



ಯಾವುದೋ ಹಕ್ಕಿಯೋ ಏನೋ ಬಂದು ಆ ಹುಳುಗಳನ್ನು ಹಬ್ಬದೂಟದಂತೆ ಗುಳುಂ ಮಾಡಿರಬೇಕು ಎಂದುಕೊಂಡು, ಹೊಳೆಯುತ್ತಿದ್ದ ಒಂದು ಚಿಗುರನ್ನು ಕಿತ್ತುಕೊಂಡು ನೋಡಿದರೆ ಇದು ಚಿಗುರಲ್ಲಾ!. ಎಲೆಯೇ ಅಲ್ಲ!.

*ಗಂಗನ ಗುಡ್ಡವು ಮರಿಹುಳವಾಗಿ,*
*ಆ ಹುಳವು ಲಾರ್ವೆಯಾಗಿ,*
*ಆ ಲಾರ್ವೆಯು ಪ್ಯೂಪೆಯಾಗಿತ್ತು ಕಣೆ!*

ಹಕ್ಕಿಗಳ ಕಣ್ಣು ತಪ್ಪಿಸಿ ಕಳ್ಳನಂತೆ ಎಲೆಯ ಕೆಳಗೆ ಕುಳಿತು ಆ ಎಲೆಗಳನ್ನೆಲ್ಲಾ ತಿಂದು ಮುಗಿಸಿದ ಮೇಲೆ, ಬಚ್ಚಿಕ್ಕಿಕೊಳ್ಳಲು ತಾಣವಿಲ್ಲದೇ ಎಲ್ಲಾ ಲಾರ್ವೆಗಳು ಚಿಗುರೆಲೆಯಂತೆ ಮಾರ್ಪಾಡಿಸಿಕೊಂಡು ಈ ಕಿಲಾಡು ಹುಳುಗಳು ಹಕ್ಕಿಗಳಿಗೆ ಯಾಮಾರಿಸುವುದಿರಲಿ, ನನ್ನನ್ನೇ ಸರಿಯಾಗಿ ಯಾಮಾರಿಸಿ ಬಿಟ್ಟಿದ್ದವು.!

ಬಳಂಜಿ ಗಿಡವು ತನ್ನ ಆಹಾರೋತ್ಪಾದನೆಯ ಕಾರ್ಖಾನೆಗಳಾದ ಹಸಿರು ಎಲೆಗಳನ್ನೆಲ್ಲಾ ಈ ಬಕಾಸುರ ಲಾರ್ವೆಗಳು ತಿಂದು ಕಾಲಿಮಾಡಿದ ಮೇಲೆ, ಈ ಗಿಲೀಟು ಚಿಗುರಗಳನಿಟ್ಟುಕೊಂಡು ಏನೂ ಪ್ರಯೋಜನ? ಎಂದುಕೊಂಡು. ಕಾಂಡಕ್ಕೆ ಅಂಟಿಕೊಂಡಿದ್ದ ರೊಂಬೆಯ ಗೆಣ್ಣುಗಳಲ್ಲಿ ಎಲೆಗಳಿಗೆ ಆಧಾರವಾಗಿದ್ದ ಕೊಂಬೆಯ ತೊಟ್ಟುಗಳನ್ನು ಕಳಚಿ ಅದರ ಮೇಲೆ ನಕಲಿ ಚಿಗುರುಗಳಾಗಿ ಸಾಲಾಗಿ ಕುಳಿತಿದ್ದ ಪ್ಯೂಪೆಗಳ ಸಮೇತ ಇಡೀ ರೊಂಬೆಯನ್ನೆ ನೆಲಕ್ಕೆ ಉರುಳಿಸಲು ಸನ್ನದ್ದಗೊಂಡು ತೊಟ್ಟು ಕಳಚಿ ಉದುರಿಸ ತೊಡಗಿತು.

ಈ ಕಿಲಾಡಿ ಚಿಟ್ಟೆ ಮರಿಗಳು, ಅವಿನ್ನೂ ಲಾರ್ವೇ ಸ್ಟೇಜ್‌ನಲ್ಲಿ ಇದ್ದಾಗಲೇ ಮುಂದೇ ತಾನು ಚಿಗುರೆಲೆಯಂತೆ ಪ್ಯೂಪೆಯಾಗಿ ಮಾರ್ಪಾಡಾದಾಗ ಬರುವ ಗಂಡಾತಂರವನ್ನು ಮೊದಲೇ ತಿಳಿಯಿತೋ ಏನೋ!, ಗಿಡ ತೊಟ್ಟು ಕಳಚಲು ಶುರು ಮಾಡುವುದ್ದಕ್ಕಿಂತ ಬಹಳ ಮುಂದೇನೇ ಅಂದರೆ ಅದು ಲಾರ್ವೇಯಾಗಿದ್ದಾಗಲೇ ಎಲೆಯ ಗೊಂಚಲಿನ ತೊಟ್ಟು ರೊಂಬೆಗೆ ಕೂಡಿರುವ ಜಾಗದಲ್ಲಿ ತನ್ನ ಬಾಯಿಯಿಂದ ಹೊರ ಸೂಸುವ ರೇಷ್ಮೆಯಂತಾ ನೂಲಿನಿಂದ ಸುತ್ತಿ-ಸುತ್ತಿ, ಗಿಡವು ತೊಟ್ಟು ಉದುರಿಸಿದರೂ ಪ್ಯೂಪೆಗಳು ಕೆಳಗೆ ಬೀಳದೇ ಅಲ್ಲೇ ಅಂತರಾಟದಲ್ಲಿ ನ್ಯಾತಾಡುತ್ತಿರುವಂತೆ ಮಾಡಿ ಭದ್ರಪಡಿಸಿದ್ದವು.

ಮುಖ್ಯ ಇಲ್ಲಿ ಈ ಸಣ್ಣ ಹುಳಗಳಿಗೆ, ಎಲೆ ಕಳೆದುಕೊಂಡ ಗಿಡವು ಎಲೆಗೊಂಚಲಿನ ರೊಂಬೆಗಳ ಗೆಣ್ಣು ಕಳಚಿ ಕೆಳಗಾಕುತ್ತದೆ ಎಂಬುದು ಮೊದಲೇ ಹೇಗೆ ಗೊತ್ತು? ಈ ಹುಳಗಳೂ ಮುಂದಾಲೋಚನೆ ಮಾಡಿಯೇ ಸಿಲ್ಕ್ ಸುತ್ತಿತೇ? ಎಂಬುದು ಇನ್ನು ನನ್ನ ತಲೆಯಲ್ಲಿ ಪರಿಹಾರವಾಗದೇ ಕೊರೆಯುತ್ತಿದೆ.



ಈ ನಕಲಿ ಚಿಗುರಿನ ವೇಷತಾಳಿದ್ದ ಗ್ರಾಸ್ ಯೆಲ್ಲೋ ಜಾತಿಯ ಚಿಟ್ಟೆಯ ಲಾರ್ವೆಗಳು, ಎಷ್ಟು ಚನ್ನಾಗಿ ಎಲೆಗಳನ್ನು ಮಿಮಿಕ್ ಮಾಡಿದ್ದವೆಂದರೆ, ದೊಡ್ಡ ದೊಡ್ಡ ಚಿಟ್ಟಗಳನ್ನೇ ಬಲೆಗೆ ಕೆಡವಿ ಹಿಡಿದು ತಿನ್ನುವ ಜಾಂಟ್ ಹುಡ್ ಜೇಡವೊಂದು ಆ ಬಳಂಜಿ ಗಿಡಕ್ಕೆ ಜೇಡರ ಬಲೆ ಕಟ್ಟಿದ್ದರೂ, ಜೂಸಿನ

ಪ್ಯಾಕೆಟ್ಟಿನಂತೆ ಇರುವ ನೂರಾರು ಪ್ಯೂಪೆಗಳು ಕಣ್ಣುಮುಂದೆ ಇದ್ದರೂ, ಅವು ಚಿಗುರೆಲೆಗಳೆಂದು ಬಗೆದು, ಬಲೆ ಎಣೆದು ಬೇಟೆಗಾಗಿ ಕಾಯಿತ್ತಿದೆ.

ರೊಂಬೆಯ ಮೇಲೆ ಬಂದು ಕೂತಿರುವ ಕಳ್ಳಿಪೀರ ಹಕ್ಕಿಯು, ಬಹಳ ವೇಗವಾಗಿ ಹಾರುವ ಏರೋಪ್ಲೇನ್ ಚಿಟ್ಟೆಯನ್ನೇ ಬೆನ್ನಟ್ಟಿ ಅಂತರಾಟದಲ್ಲೇ ಲಾಗ ಹಾಕಿ ಹಿಡಿದು ತಿನ್ನುತ್ತದಾದರೂ, ಕಾಲ ಬುಡದಲ್ಲೇ ಇರುವ ಈ ಚಿಗುರು ಚಿಟ್ಟೆಗಳನ್ನು ಚಿಗುರೆಂದುಕೊಂಡು ತಿನ್ನದು!. ಅಬ್ಬಾ, ಉಳಿವಿಗಾಗಿ ಎಷ್ಟೆಲ್ಲಾ ನಾಟಕ, ಮಾರ್ಪಾಡು, ಯೋಜನೆ, ವೇಷ!.

ಇಷ್ಟೆಲ್ಲಾ ಮಾಡಿದ್ದು ವಂಶೋದ್ಧಾರ ಮಾಡಲು ಅಲ್ಲವೇ? ವಂಶೋದ್ಧಾರ ಮಾಡಲು ಗಂಡು–ಹೆಣ್ಣು ಕೂಡಬೇಕು. ಗಂಡು–ಹೆಣ್ಣುಗಳನ್ನು ಹುಡುಕಲು, ಹಾರಾಡಲು ರೆಕ್ಕೆ ಬೇಕು. ಗಂಡು–ಹೆಣ್ಣುಗಳನ್ನು ಆಕರ್ಷಿಸಲು, ಬಣ್ಣ ಬಣ್ಣವಾಗಿರುವ ರೆಕ್ಕೆ ಬೇಕು. ಅದಕ್ಕೇ.

ಆ ಗಂಗನ ಗುಡ್ಡಾ, *ಮರಿಹುಳವಾಗಿ,*
*ಆ ಹುಳವು ಎಲೆ ತಿನ್ನುವ ಚೀಲವಾಗಿ,*
*ಆ ಚೀಲವು ಚಿಗುರಾಗಿ,*
*ಆ ಚಿಗುರೇ ಪ್ಯೂಪೆಯಾಗಿ,*
*ಆ ಪ್ಯೂಪವು ಬಣ್ಣದ ಚಿಟ್ಟೆಯಾಗಿತ್ತು ಕಣೆ!*

ಏಳೆಂಟು ದಿನದಲ್ಲೇ ಇಷ್ಟೆಲ್ಲಾ ಜೀವಂತ ನಾಟಕವಾಡಿಯಾದ ಮೇಲೆ ಕಂಬಳಿಹುಳದಂತಿದ್ದದ್ದು, ಪ್ಯೂಪೆಯಾಗಿ ಅಲ್ಲಿ ಚಿಟ್ಟೆಯಾಗಿ ಮಾರ್ಪಟ್ಟು, ಪ್ಯೂಪೆ ಹೊಡೆದು ರೆಕ್ಕೆ ಸಹಿತವಾಗಿ ಆಚೆ ಬಂದಾಗ ಅದು ತೆವಳುವ ಹುಳವಾಗಿರಲಿಲ್ಲಾ ಹಳದೀ ಬಣ್ಣದ ಗ್ರಾಸ್ ಯೆಲ್ಲೋ ಚಿಟ್ಟೆಯಾಗಿತ್ತು.

ಹೀಗೆ ಹೊರಬಂದ ಚಿಟ್ಟೆಗೆ ಎಲೆ ತಿನ್ನಲು ಬಾಯಿಲ್ಲ! ಅದರ ಬದಲು ಬಣ್ಣ ಬಣ್ಣದ ಹೂವುಗಳಲ್ಲಿ ಇರುವ ಮಕರಂದವನ್ನು, ನಾವು ಎಳನೀರಿಗೆ ಸ್ಟ್ರಾ ಹಾಕಿ ಹೀರಿ ಕುಡಿವಂತೆ ಹೂವಿನಲ್ಲಿರುವ ಮಕರಂದವನ್ನು ಹೀರಲು ಸ್ಟ್ರಾನಂತ ಉದ್ದವಾದ ಕೊಳವೆ ಸುರಳಿಸುತ್ತಿದಂತೆ ಸುತ್ತಿ ಇಟ್ಟಿಕೊಂಡಿದೆ. ಇನ್ನೂ ಹಸಿಯಾಗಿದ್ದ ತನ್ನ ಹಳದಿ ರೆಕ್ಕೆಯನ್ನು ಬಿಸಿಲಿನಲ್ಲಿ ಒಣಗಿಸಿಕೊಂಡು ಗಂಡು ಹೆಣ್ಣುಗಳನ್ನು ಕೂಡಲು ಎಲ್ಲವೂ ಹಾರಿ ಹೋದವು.

ಇದಾದ ಒಂದು ವಾರದಲ್ಲೇ ಬಳಂಜಿ ಗಿಡ ಬೆಳೆಯುವ ಚಿಗುರಿಕ್ಕಿತು,ಚಿಗುರು ಬೆಳೆಯಿತು.

ಹೊಂಬಣ್ಣದ ಚಿಗುರು ತಿಳಿಹಸಿರಾಯಿತು

ತಿಳಿಹಸಿರು ಹಚ್ಚ ಹಸಿರಾಗಿ, ಅ ಎಲೆಗಳು ಇನ್ನೇನು ಆಹಾರೋತ್ಪಾದನೆ ಶುರುಮಾಡಬೇಕು ಅಷ್ಟರಲ್ಲೇ ಹಲವು ಹರಿಶಿಣ ಬಣ್ಣದ ಗ್ರಾಸ್ ಯೆಲ್ಲೋ ಚಿಟ್ಟೆಗಳು ತಮ್ಮ ಹನಿಮೂನ್ ಮುಗಿಸಿ, ತನ್ನ ಮಕ್ಕಳಗೆ ಊಟವಿಕ್ಕಿ ಸಾಕಿ ಸಲಹುವ ಹೊಸ್ಟ್ ಪ್ಲಾಂಟಿಗಾಗಿ ಹುಡುಕಿಕೊಂಡು ಪರಿಶೀಲನೆಯ ಹಾರಾಟ ಮಾಡುತ್ತಿದ್ದವು. ಪಾಪ ಆ ಗಿಡಕ್ಕೆ ಕೈಯಿಲ್ಲಾ! ಕಾಲಿಲ್ಲಾ! ನಮ್ಮ ಮಕ್ಕಳಿಗೆ ಅವು ನೋಡುವಾ ಕಾಣುವ ಬಣ್ಣ ಬಣ್ಣದ ಚಿಟ್ಟೆಗಳನ್ನು ಗುರುತಿಸಿ ತಿಳಿಯಲು, ಕರುನಾಡ ಕನ್ನಡದಲ್ಲಿ ನೆಟ್ಟಗಿರುವ ಚಿಟ್ಟೆ ಬುಕ್ಕಿಲ್ಲಾ!.



# ವರ್ಣ ವೈಭವದ ಬದುಕು

ಅದೋ ನೋಡದೋ ಸಂಸ್ಕೃತಿಯ ಧಾತು
ಯನ್ನಜ್ಜ ಮುತ್ತಜ್ಜರಾಳಿದ ನಾಡು
ಇದು ಅವರ ಜನಪದದ ಗತ್ತು
ಮತ್ತು ವರ್ಣ ವೈಭವದ ಬೀಡು

ಪೈರು ನೆಡುವಾಗ ಕುಯ್ಯುವಾಗ
ಮಗುವ ಆಡಿಸುವಾಗ ನಿದ್ದೆ ಮಾಡಿಸುವಾಗ
ರಾಗಿ ಬೀಸುವಾಗ ಅಜ್ಜಿ ಮನೆಯಲ್ಲಿ
ಹಾಡುವುದು ಜನಪದದ ಗತ್ತು

ಡೋಳು ಕುಣಿತ ಕೀಲು ಕುದುರೆ ಬಯಲು ನಾಟಕ
ಭಜನೆ ಯಕ್ಷಗಾನ ಕಂಸಾಳೆ ಕೋಲಾಟ
ಬಣ್ಣ ಅಚ್ಚಿ ಕುಣಿದು ಕುಪ್ಪಳಿಸುವುದು
ಇವರ ವರ್ಣ ರಂಜಿತ ಜನಪದದ ಬದುಕು

ಹಚ್ಚ ಹಸಿರಿನ ಸೀರೆಯ ತೊಟ್ಟು
ಅಣೆ ತುಂಬ ಕುಂಕುಮದ ಬೋಟ್ಟಿಟ್ಟು
ಬುತ್ತಿಯನ್ನೆತ್ತಿ ನಡೆದಳು ವಲದ ಕಡೆ
ಮಲೆನಾಡ ಮಡಿಲಲ್ಲಿ ಅಜ್ಜ ಮುತ್ತಜ್ಜನ ಕಡೆ

ಜನಪದದ ಗತ್ತು ಮುತ್ತಜ್ಜನ ಕಾಲ
ರಂಗು ರಂಗಿನ ಬದುಕು ಇವೆಲ್ಲ
ಅವರ ಕಾಲದ ಸಂಸ್ಕೃತಿಯ ಧಾತು
ವರ್ಣ ವೈಭವದ ಬದುಕು ಇದು.